# ಆಲ್ಫ್ರೆಡ್ ಆಡ್ಲರ್ (1870-1937)

## ಇಂದಿರಾ ಜೈಪ್ರಕಾಶ್



***

ಆಡ್ಲರ್ ವ್ಯಷ್ಟಿ ಮನೋವಿಜ್ಞಾನ (Individual Psychology)ವನ್ನು ಸ್ಥಾಪಿಸಿದ ಆಸ್ಟ್ರೀಯಾದ ಮನೋವೈದ್ಯ. ವಿಯನ್ನಾದಲ್ಲಿ ಧಾನ್ಯಗಳ ವರ್ತಕನಾಗಿದ್ದ ಇವನ ತಂದೆ ಹಂಗೇರಿ ಮೂಲದ ಯಹೂದಿ. ಇವನ ತಾಯಿ-ತಂದೆಯರ ಏಳು ಮಕ್ಕಳಲ್ಲಿ ಇವನು ಎರಡನೆಯವನು. ಬಾಲ್ಯದಲ್ಲಿ ರಿಕೆಟ್ಸ್, ನ್ಯುಮೋನಿಯಾ ಮುಂತಾದ ರೋಗಗಳು ಇವನನ್ನು ಕಾಡಿದ್ದವು. ಅಲ್ಲದೆ ತನ್ನ ಸಹೋದರನ ಸಾವನ್ನೂ ಹತ್ತಿರದಿಂದ ಕಂಡಿದ್ದ, ಇದರಿಂದ ತಾನು ವೈದ್ಯನಾಗಬೇಕೆಂದು ನಿರ್ಧರಿಸಿದ್ದ. 1895ರಲ್ಲಿ ಇವನು ನೇತ್ರವೈದ್ಯನಾಗಿ ತನ್ನ ವೈದ್ಯಕೀಯ ವೃತ್ತಿ ಪ್ರಾರಂಭಿಸಿದ. ನಂತರ ನರವಿಜ್ಞಾನ ಮತ್ತು ಮನೋವೈದ್ಯಕೀಯವನ್ನೂ ಅಭ್ಯಸಿಸಿದ. ಆ ಸಮಯದಲ್ಲಿ ವಿಯನ್ನಾದಲ್ಲಿ ಸಿಗ್ಮಂಡ್ ಫ್ರಾಯ್ಡ್ ಬಹಳ ಸುದ್ದಿ ಮಾಡುತ್ತಿದ್ದ. ಇವನು ಫ್ರಾಯ್ಡನ ಸ್ವಪ್ನ ವಿಶ್ಲೇಷಣೆಯ ಸಂಕಲ್ಪನೆಯನ್ನು ಸಮರ್ಥಿಸಿ ಒಂದು ಲೇಖನ ಬರೆದಿದ್ದ. ಇದು ಫ್ರಾಯ್ಡನ ಗಮನಕ್ಕೆ ಬಂದು ಆತ ಆಡ್ಲರನನ್ನು ತಾನು ನಡೆಸುತ್ತಿದ್ದ ಚರ್ಚಾಕೂಟದಲ್ಲಿ ಭಾಗವಹಿಸಲು ಆಹ್ವಾನ ನೀಡಿದ. ಆ ಸಮಯದಲ್ಲಿ ಅನೇಕ ಬುದ್ಧಿಜೀವಿಗಳು ಫ್ರಾಯ್ಡ್ ನ ಚಿಕಿತ್ಸಾಲಯದಲ್ಲಿ ಪ್ರತಿ ಬುಧವಾರ ಸಂಜೆ ಸಭೆ ಸೇರಿ ಅವನೊಡನೆ ಚರ್ಚೆ ನಡೆಸುತ್ತಿದ್ದರು. 1902ರಲ್ಲಿ ಆಡ್ಲರ್‌ನಿಗೆ ಅಂತಹ ಸಭೆಗೆ ಆಹ್ವಾನ ಬಂದು ಫ್ರಾಯ್ಡ್ನ ಸಂಪರ್ಕ ಬೆಳೆಯಿತು. ಈ ಅನೌಪಚಾರಿಕ ಸಭೆಯೇ ಮುಂದೆ 'ವಿಯನ್ನಾ ಸೈಕೋಅನಾಲಿಟಿಕಲ್ ಸೊಸೈಟಿ'ಯಾಯಿತು. ಇದಕ್ಕೆ ಕೆಲಕಾಲ ಆಡ್ಲರ್ ಅಧ್ಯಕ್ಷನಾಗಿದ್ದ. 1911ರ ವೇಳೆಗೆ ಫ್ರಾಯ್ಡ್ನ ಜೊತೆ ಭಿನ್ನಾಭಿಪ್ರಾಯಗಳಿಂದಾಗಿ ಅದರಿಂದ ಹೊರಬಂದ. ಆಡ್ಲರ್ ಫ್ರಾಯ್ಡ್ನ ಶಿಷ್ಯನಾಗಿರಲಿಲ್ಲ, ಸಮಕಾಲೀನನಾಗಿದ್ದು ತನ್ನದೇ ಪಂಥವನ್ನು ಬೆಳೆಸಿದ್ದ.

ಫ್ರಾಯ್ಡನ ಸಂಪರ್ಕ ಕಡಿದುಕೊಂಡು ಆಡ್ಲರ್ 1912ರಲ್ಲಿ 'ಸೊಸೈಟಿ ಫಾರ್ ಇಂಡಿವಿಜುವಲ್ ಸೈಕಾಲಜಿ' ಯನ್ನು ಸ್ಥಾಪಿಸಿದ. ಬಹುಬೇಗ ತನ್ನದೇ ಮನೋಚಿಕಿತ್ಸಾ ಪಂಥ ಮತ್ತು ವ್ಯಕ್ತಿತ್ವ ಸಿದ್ಧಾಂತಗಳಿಂದ ಪ್ರಸಿದ್ಧನಾದ. ಸುಮಾರು 25 ವರ್ಷಗಳ ಕಾಲ ದೇಶವೆಲ್ಲಾ ಸುತ್ತಾಡಿ ಮಾನಸಿಕ ಸುಸ್ಥಿತಿಯ ಜೊತೆಗೆ ಸಾಮಾಜಿಕ ಸಮಾನತೆಯನ್ನೂ ಏಕೀಕರಿಸುವ ಸಂಚಲನ ಹಮ್ಮಿಕೊಂಡಿದ್ದ. ಪ್ರಥಮ ವಿಶ್ವಸಮರದಲ್ಲಿ ಸೈನ್ಯದಲ್ಲಿ ವೈದ್ಯನಾಗಿದ್ದ. 1930ರ ಹೊತ್ತಿಗೆ ವಿಯನ್ನಾದಲ್ಲಿ ನಾಜಿಗಳ ಉಪಟಳ ಹೆಚ್ಚಾಗತೊಡಗಿತು. ಇವನು ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ್ದರೂ

ಯಹೂದಿ ಮೂಲದವನು ಎಂಬ ಕಾರಣಕ್ಕೆ ಅಪಾಯಕ್ಕೆ ಒಳಗಾಗಿದ್ದು ದೇಶ ಬಿಟ್ಟು ಅಮೆರಿಕೆಗೆ ಬಂದು ನೆಲೆಸಿದ. ಲಾಂಗ್ ಐಲ್ಯಾಂಡ್ ವೈದ್ಯಕೀಯ ವಿದ್ಯಾಲಯದಲ್ಲಿ ಪ್ರಾಧ್ಯಾಪಕನಾಗಿ ತನ್ನ ಕೆಲಸ ಮುಂದುವರಿಸಿದ್ದ. ಇವನ ಬರಹಗಳು ಅನೇಕವಿದ್ದು 'ದಿ ನ್ಯೂರಾಟಿಕ್ ಕ್ಯಾರೆಕ್ಟರ್'(The Neurotic Character) ಎನ್ನುವುದನ್ನು ಇವನ ಮೇರುಕೃತಿ ಎಂದು ಪರಿಗಣಿಸಲಾಗುತ್ತದೆ.

ಆಡ್ಲರನ ಪ್ರಕಾರ ಪ್ರತಿಯೊಬ್ಬರಲ್ಲೂ 'ಕೀಳರಿಮೆ (inferiority)'ಯ ಭಾವನೆ ಇದ್ದು ಅದರಿಂದ ಹೊರಬರಲು ಶ್ರೇಷ್ಠತನಕ್ಕಾಗಿ ಹೆಣಗಾಡುತ್ತಾರೆ. ಈ ಹಂಬಲವೇ ಮಾನವ ಆಲೋಚನೆ, ಸಂವೇಗ ಮತ್ತು ವರ್ತನೆಯ ಹಿಂದಿರುವ ಚಾಲಕ. ಶ್ರೇಷ್ಠತೆಯ ಆಶಯಕ್ಕೆ ಸಾಮಾಜಿಕ, ನೈತಿಕ ಅಡಚಣೆಗಳಿರುತ್ತವೆ. ಸರಿಯಾದ ಮಾರ್ಗದರ್ಶನ ಇಲ್ಲದಿದ್ದರೆ ಕೀಳರಿಮೆ ನಿವಾರಿಸಲು ವ್ಯಕ್ತಿ ಸ್ವಾರ್ಥಿ, ಆಕ್ರಮಣಶೀಲ ಮತ್ತು ಅಧಿಕಾರದಾಹಿಯಾಗಬಹುದು. ಮನೋವೈದ್ಯರು ಮಕ್ಕಳಲ್ಲಿ ಸಮಸ್ಯೆಗಳನ್ನು ತಡೆಯುವ ಕ್ರಮ ರೂಪಿಸಬೇಕು. ಸಾಮಾಜಿಕ ಆಸಕ್ತಿಯನ್ನು ಬೆಳೆಸುವುದು, ಕುಟುಂಬ ಮತ್ತು ಸಮುದಾಯವನ್ನು ಒಟ್ಟಾಗಿಸುವುದು ಜನರಲ್ಲಿ ಮಾನಸಿಕ ಆರೋಗ್ಯ ಕಾಪಾಡುತ್ತದೆ.

ಆಡ್ಲರ್ ಮತ್ತು ಫ್ರಾಯ್ಡ್ನ ಸಿದ್ಧಾಂತಗಳ ನಡುವೆ ಮುಖ್ಯ ವ್ಯತ್ಯಾಸಗಳು ಹೀಗಿವೆ. ಆಡ್ಲರ್ ಪ್ರಕಾರ ಮಾನವ ವರ್ತನೆಗೆ ಮೂಲ ಪ್ರೇರಣೆ ಕಾಮೇಚ್ಛೆಯಲ್ಲ, ಶ್ರೇಷ್ಠತೆಯ (superiority) ಹಂಬಲ. ಸಾಮಾಜಿಕ ಕಾರಣಗಳೂ ಆಂತರಿಕ ಕಾರಣಗಳಷ್ಟೇ ವರ್ತನೆಗೆ ಕಾರಣವಾಗಬಲ್ಲವು. ಲಿಂಗತ್ವ, ರಾಜಕಾರಣ ಮುಂತಾದವೂ ಕಾಮೇಚ್ಛೆಯಂತೆ ಪ್ರಬಲ ಶಕ್ತಿಗಳು. ಮಾನವನನ್ನು ಒಂದು ಸಮಷ್ಟಿಯಂತೆ, ಸಮಗ್ರವಾಗಿ ನೋಡಬೇಕು.  ಮಾನವವರ್ತನೆಯನ್ನು ಅರ್ಥಮಾಡಿಕೊಳ್ಳಲು ಸ್ತ್ರೀ-ಪುರುಷರ ನಡುವಿನ ಅಧಿಕಾರಕ್ಕೆ ಸಂಬಂಧಿಸಿದ ಗತಿಶೀಲತೆ (power dynamics)ಯನ್ನೂ ಅರಿಯಬೇಕು. ಸಾಮಾಜಿಕ ಅಂತಃಪ್ರೇರಣೆಗಳಿಗೆ ವಿಕಾಸದಲ್ಲಿ ಮುಖ್ಯ ಪಾತ್ರವಿದೆ. ಹುಟ್ಟಿದಾಗ ಅಸಹಾಯ ಮತ್ತು ದುರ್ಬಲವಾದ ಮಗುವಿನಲ್ಲಿ "ಕೀಳರಿಮೆ" (inferiority) ಇರುತ್ತದೆ. ಆದರೆ, ವ್ಯಕ್ತಿಯಲ್ಲಿ 'ಅಧಿಕಾರೇಚ್ಛೆ' (will to power) ಎಂಬ ಸೃಜನಶೀಲತೆಯೂ ಇರುತ್ತದೆ. ಇದು ವ್ಯಕ್ತಿ ಸಮಾಜದ ಸಂಪೂರ್ಣ ಸದಸ್ಯನಾಗಲು, ತನ್ನ ವೈಯುಕ್ತಿಕ ಸಮಗ್ರತೆ ಪಡೆಯಲು ಪ್ರೋತ್ಸಾಹಿಸುತ್ತದೆ. ಕೀಳರಿಮೆ ಭಾವಗ್ರಂಥಿ ಇರುವ ವ್ಯಕ್ತಿಗಳು ತಮಗಿರಬಹುದಾದ ಕೊರತೆಗಳನ್ನು ನೀಗಿಸಲು ಪರಿಹಾರ (compensation) ಹುಡುಕುವುದರಲ್ಲೇ ಮಗ್ನರಾಗುತ್ತಾರೆ. ಸಲಿಂಗಕಾಮಕ್ಕೆ ತನ್ನ ಲಿಂಗತ್ವದ ಬಗ್ಗೆ ವ್ಯಕ್ತಿಗಿರುವ ಕೀಳರಿಮೆ ಕಾರಣ.

ಆಡ್ಲರ್ ನೀಡಿದ ಇನ್ನೊಂದು ಸಂಕಲ್ಪನೆ 'ಜೀವನ ಶೈಲಿ'. ಪ್ರತಿಯೊಬ್ಬರೂ ಜೀವನದಲ್ಲಿ ಸಾರ್ಥಕತೆ ಪಡೆಯಲು ಅವರದೇ ಆದ ವಿಶಿಷ್ಟ ವರ್ತನೆ, 'ಜೀವನಶೈಲಿ' (Style of life) ತೋರುತ್ತಾರೆ. ಜನನಕ್ರಮವೂ ಜೀವನಶೈಲಿಯನ್ನು ಪ್ರಭಾವಿಸುತ್ತದೆ. ಮೊದಲನೆಯ ಮಗು ತಾಯ್ತಂದೆಯರ ಗಮನ ಮತ್ತು ಅತಿಪ್ರೀತಿಗೆ ಪಾತ್ರವಾಗಿದ್ದು ಎರಡನೆಯ ಮಗುವಿನ ಆಗಮನದಿಂದ ತನ್ನ ಸ್ಥಾನ ಕಳೆದುಕೊಳ್ಳುತ್ತದೆ. ಕೊನೆಯ ಮಗು ಬಹಳ ಮುದ್ದಿನಿಂದ ಬೆಳೆದು ಅದರಲ್ಲಿ ಸಾಮಾಜಿಕ ತದಾನುಭೂತಿಯ ಕೊರತೆ ಇರುತ್ತದೆ. ನಡುವಿನ ಮಗು ಹಿರಿಯ ಮತ್ತು ಕಿರಿಯರ ನಡುವೆ ಸಿಕ್ಕಿಕೊಂಡು, ಅವರ ಎದುರು ಬಿದ್ದು ತನ್ನನ್ನು ಸಮರ್ಥಿಸಿಕೊಂಡು ಜಯಶೀಶಿಲವಾಗುತ್ತದೆ.  ಮೊದಲನೆಯ ಮಕ್ಕಳಲ್ಲಿ ಅಪಸಮಾಯೋಜನೆಯ ಸಂಭವ ಹೆಚ್ಚು. ಬಾಲ್ಯದ ಅನುಭವದಿಂದ, ಸ್ವಾರ್ಥಪರತೆ, ದಬ್ಬಾಳಿಕೆ, ಜವಾಬ್ದಾರಿಯಿಂದ ನುಣುಚಿಕೊಳ್ಳುವ ಬುದ್ಧಿಯಲ್ಲದೆ ಸಮಾಜಕ್ಕೆ ಉಪಯುಕ್ತ ವರ್ತನಾ ಪ್ರಕಾರಗಳೂ ಬೆಳೆಯುತ್ತವೆ.

ಆಡ್ಲರ್ ವ್ಯಕ್ತಿತ್ವ ಪ್ರರೂಪಗಳ ಬಗ್ಗೆ ಬರೆದರೂ ಇಂತಹ ವರ್ಗೀಕರಣ ವ್ಯಕ್ತಿಗಳ ವಿಶಿಷ್ಟತೆಯನ್ನು ನಿರ್ಲಕ್ಷ ್ಯ ಮಾಡಬಾರದು ಎಂದು ಎಚ್ಚರಿಸಿದ್ದ. ಕೆಲವು ಜನರು ಬಹಳ ಸೂಕ್ಷ್ಮ ಮನಸ್ಸಿನವರಾಗಿದ್ದು ಜೀವನದ ಸಮಸ್ಯೆಗಳಿಂದ

ಬೇರೆಯವರು ಪಾರುಮಾಡಬೇಕೆಂದು ನಿರೀಕ್ಷಿಸುತ್ತಾರೆ. ಒತ್ತಡ ಹೆಚ್ಚಾದಾಗ ಇಂತಹವರು ಆತಂಕ, ಅತಿಭೀತಿ, ಗೀಳು-ಚಟ ಮುಂತಾದ ಸಮಸ್ಯೆಗಳಿಗೆ ಒಳಗಾಗುತ್ತರೆ. ಸೋಲನ್ನು ದ್ವೇಷಿಸುವ ಇನ್ನೊಂದು ವರ್ಗದ ಜನ ಅದನ್ನು ತಪ್ಪಿಸಿಕೊಳ್ಳಲು ಅತಿಕಡಿಮೆ ಸಾಮಾಜಿಕ ಸಂಪರ್ಕ ಹೊಂದುತ್ತಾರೆ. ಬೇರೆಯವರ ಮೇಲೆ ಅಧಿಕಾರ ಸಾಧಿಸಲು ಬಯಸುವ ಜನರು ಪ್ರಬಲರಾಗಿರಲು ಇತರರನ್ನೂ ಮತ್ತು ಸನ್ನಿವೇಶಗಳನ್ನು ದುರುಪಯೋಗ ಮಾಡಿಕೊಳ್ಳಬಲ್ಲರು. ಇಂತಹವರು ಸಮಾಜ-ವಿರೋಧಿ ವರ್ತನೆ ತೋರುವ ಸಂಭವ ಹೆಚ್ಚು. ಸಾಮಾಜಿಕವಾಗಿ ಉಪಯುಕ್ತರಾದವರು ಹೆಚ್ಚು ಸಾಮಾಜಿಕ ಸಂಪರ್ಕಗಳನ್ನು ಹೊಂದಿದ್ದು ಸಮಾಜದ ಒಳಿತಿಗೆ ಶ್ರಮವಹಿಸುತ್ತಾರೆ. ಇಂತಹ ಪ್ರರೂಪಗಳು ಬಾಲ್ಯದಲ್ಲೇ ರೂಪುಗೊಂಡು ಜೀವನಶೈಲಿಯ ರೂಪದಲ್ಲಿ ಹೊರಬೀಳುತ್ತವೆ.

ವ್ಯಷ್ಟೀ ಮನೋಚಿಕಿತ್ಸೆಯಲ್ಲಿ ಜೀವನಶೈಲಿಯನ್ನು ಅರ್ಥಮಾಡಿಕೊಂಡು ವ್ಯಕ್ತಿಯನ್ನು ಸಮಾಜಕ್ಕೆ ಸಮರ್ಪಕವಾಗಿ ಹೊಂದಿಕೊಳ್ಳಲು ಮತ್ತು ಸಮರ್ಥನಾಗಲು ಸಹಾಯ ಮಾಡಲಾಗುತ್ತದೆ. ಆಡ್ಲರನ ಪ್ರಕಾರ ಕನಸುಗಳು ನಮ್ಮ ಅಸುರಕ್ಷತೆಗಳು, ಕೀಳರಿಮೆಗಳು ಮತ್ತು ಆಳವಾಗಿರುವ ಭಯಗಳನ್ನು ತೋರಿಸುತ್ತವೆ. ಅವು ನಮ್ಮ ವ್ಯಕ್ತಿತ್ವ ಮತ್ತು ಜೀವನಶೈಲಿಯನ್ನು ಬಿಂಬಿಸುತ್ತವೆ. ಹೀಗಾಗಿ ವಿಶ್ಲೇಷಣೆಯಲ್ಲಿ ಅವು ಉಪಯುಕ್ತ. ಮಾನಸಿಕ ಸಮಸ್ಯೆಗಳ ನಿರೋಧಕ್ಕೆ ಮಕ್ಕಳನ್ನು ಕುಟುಂಬದ ಸಮಾನ ಸದಸ್ಯರಂತೆ ತರಬೇತಿ ನೀಡಬೇಕು. ಮಕ್ಕಳ ಸರ್ವಾಂಗೀಣ ವಿಕಾಸದಲ್ಲಿ ಸಮಾಜದ ಇತರರ ಪಾತ್ರವೂ ಇರುತ್ತದೆ. ಆದುದರಿಂದ ಶಿಕ್ಷಕರು, ದಾದಿಯರು, ಪಾಲಕರಂತೆಯೇ ಮಕ್ಕಳನ್ನು ಪ್ರಜಾತಂತ್ರಾತ್ಮಕ ರೀತಿಯಲ್ಲಿ ನಡೆಸಿಕೊಳ್ಳಬೇಕು. ಆಡ್ಲರನ ಇಂತಹ ವಿಚಾರಗಳಿಂದಾಗಿ ಅವನನ್ನು 'ಸಮುದಾಯ ಮನೋವಿಜ್ಞಾನದ ಮೂಲಪುರುಷ' ಎನ್ನಲಾಗಿದೆ.

ಮಾನವನಿಗೆ ಸಾಮಾಜಿಕ ಗುರಿ, ಸಕ್ರಿಯತೆ, ಅತ್ಮಗೌರವವಿದ್ದು ತನ್ನ ಜೀವನವನ್ನು ನಿರ್ದೇಶಿಸಬಲ್ಲ ಎಂಬ ಇವನ ವಾದಗಳು ಮುಂದೆ ಮಾನವತಾವಾದ, ಅಹಂ ಮನೋವಿಜ್ಞಾನ, ಲೊಗೊಥೆರಪಿ, ಮತ್ತು ಸ್ತ್ರೀವಾದವನ್ನು ಉತ್ತೇಜಿಸಿತು. 1921ರಲ್ಲೇ ವಿಯನ್ನಾದಲ್ಲಿ ಮಕ್ಕಳ ನಿರ್ದೇಶನಾಲಯ ತೆರೆದು ಮಕ್ಕಳನ್ನು ಬೆಳೆಸುವ ವಿಧಾನ ಮತ್ತು ಕೌಟುಂಬಿಕ ಚಿಕಿತ್ಸೆಯ ಬಗ್ಗೆ ಅನೇಕ ಸಲಹೆಗಳನ್ನು ನೀಡಿದ್ದ. ವ್ಯಾವಹಾರಿಕ ಮನೋಭಾವ ಇದ್ದ ಈತ ಸಾಮಾನ್ಯ ಜನರು ಮನೋವಿಜ್ಞಾನವನ್ನು ದೈನಂದಿನ ಜೀವನದಲ್ಲಿ ಉಪಯೋಗಿಸಿಕೊಳ್ಳಬೇಕು ಎಂದು ನಂಬಿದ್ದ. ಸಮುದಾಯ ಭಾವನೆ ಮತ್ತು ಸಾಮಾಜಿಕ ಆಸಕ್ತಿಗಳನ್ನು ಒಳಗೊಂಡು ಸಮಾಜಕ್ಕೆ ಒಳ್ಳೆಯದಾಗುವಂತಹ ಕೆಲಸಗಳನ್ನು ಕೈಗೊಳ್ಳುವ ಅಭಿಯಾನದ ಯೋಜನೆ ಹಾಕಿದ್ದ. ಫ್ರಾಯ್ಡ್, ಯೂಂಗರ ಜೊತೆ ಇವನೂ ಗತಿಶೀಲ ಪಂಥದ ನಾಯಕ ಎನಿಸಿದ್ದಾನೆ. ಆದರೆ, ಅವರಿಬ್ಬರಿಗೂ ವಿಭಿನ್ನವಾಗಿ ಇವನ ತತ್ವಗಳು ಮೂಲಸಂಕಲ್ಪವಾದ (teleology) ವನ್ನು ಆಧರಿಸಿವೆ. ಆಡ್ಲರನ ಚಿಕಿತ್ಸಾ ಕ್ರಮ ಮುಂದೆ ಸಂಜ್ಞಾನಾತ್ಮಕ ಚಿಕಿತ್ಸೆಗಳಿಗೂ ಮೂಲವಾಯಿತು. ವಿಶ್ವದಾದ್ಯಂತ ಇವನ ಚಿಂತನೆಗಳನ್ನು ಬೋಧಿಸುವ, ಸಂಶೋಧಿಸುವ ಸಂಸ್ಥೆಗಳಿವೆ. 'ದಿ ಕಲೆಕ್ಟೆಡ್ ಕ್ಲಿನಿಕಲ್ ವರ್ಕ್ಸ್ ಆಫ್ ಆಲ್ಫ್ರೆಡ್ ಆಡ್ಲರ್' (The Collected Clinical Works of Alfred Adler) ಎಂಬ ಶೀರ್ಷಿಕೆಯಡಿ ಇವನ ಸಮಗ್ರ ಕೃತಿಶ್ರೇಣಿಯನ್ನು ದಿ ಆಲ್ಫ್ರೆಡ್ ಆಡ್ಲರ್ ಇನ್ಸ್ಟಿಟ್ಯೂಟ್ ಆಫ್ ನಾರ್ತ್ ವೆಸ್ಟರ್ನ್ ವಾಶಿಂಗಟನ್ ಹೊರತಂದಿದೆ.

ಈತ 1897 ರಲ್ಲಿ ತನ್ನ ವಿದ್ಯಾಭ್ಯಾಸ ಕಾಲದಲ್ಲಿ ಪರಿಚಯವಾಗಿದ್ದ ರೈಸಾ ಎಪ್‌ಸ್ಟೈನ್ ಎಂಬ ಸೋಶಿಯಲಿಸ್ಟ್ ಆಗಿದ್ದ ರಶಿಯನ್‌ಳನ್ನು ವಿವಾಹವಾಗಿದ್ದ. ಇವರ ನಾಲ್ಕು ಮಕ್ಕಳಲ್ಲಿ ಇಬ್ಬರು ಮನೋವೈದ್ಯರಾದರು, ಇನ್ನಿಬ್ಬರು ಕಲೆ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಹೆಸರು ಮಾಡಿದರು. ಪತ್ನಿ ರೈಸಾ ಸಾಮಾಜಿಕ ಚಳುವಳಿಗಳಲ್ಲಿ ಸಕ್ರಿಯಳಾಗಿದ್ದಳು. 1937 ರಲ್ಲಿ ಸ್ಕಾಟ್‌ಲ್ಯಾಂಡ್‌ನ ಅಬರ್ಡೀನ್ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸ ನೀಡಲು ಹೋಗಿದ್ದವನು ಹಠಾತ್ತನೆ ಮರಣ

ಹೊಂದಿದ್ದನು. ಮರಣೋತ್ತರ ಪರೀಕ್ಷೆಯಿಂದ ಅವನ ಹೃದಯದ ಮಾಂಸಖಂಡಗಳು ದುರ್ಬಲವಾಗಿದ್ದವು ಎಂದು ತಿಳಿದು ಬಂದಿತ್ತು. ಅವನ ಅಂತ್ಯಸಂಸ್ಕಾರ ಅಲ್ಲಿಯೇ ನಡೆದಿತ್ತು. 2007ರಲ್ಲಿ ಚಿತಾಗಾರವೊಂದರಲ್ಲಿ ಅವನ ಹೆಸರಿರುವ ಭಸ್ಮಕುಂಡ ದೊರೆತು ಅದನ್ನು ವಿಯನ್ನಾಗೆ ತಂದು ಹೂಳಲಾಗಿತ್ತು. ಹೀಗೆ 55 ವರ್ಷಗಳ ನಂತರ ವಿಯನ್ನಾದ ಮಗ ಮತ್ತೆ ತನ್ನ ತಾಯ್ನಾಡಿಗೆ ಮರಳಿದ್ದ.

***